# 135

# ಅಕ್ಬರ-ಬೀರಬಲ ವಿನೋದ

(ತೃತೀಯ ಮುದ್ರಣ)


ಸಂಗ್ರಾಹಕರು:

ಶ್ರೀ| ಮಾಧವ ಭಟ್,

ಮಡಿಕೇರಿ.



1961.






ಒಂದಾಣೆ ಮಾಲೆ

# ಎರಡು ಏಕಾಂಕ ನಾಟಕಗಳು.

## "ನಾವು ಸಾಹುಕಾರಕುಲದವರು"

(ಏಕಾಂಕ ಪ್ರಹಸನ—ದ್ವಿತೀಯ ಮುದ್ರಣ)

ರಚಯಿತ: **ಕುಡ್ವಿ ವಾಸುದೇವ ಶೆಣೈ.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.



## "ಮಹಾಶ್ವೇತಾ"

(ಪತ್ತೇದಾರಿ ಕಥಾವಸ್ತುವನ್ನೊಳಗೊಂಡ ನಾಟಕ)

ರಚಯಿತ: **ವೈದ್ಯಗುರು ಎಂ. ಆರ್. ಭಟ್.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.

ಪರಿವೂರಿನವರು ಮೊಬಲಗನ್ನು ಅಂಚೆಚೀಟು ಮೂಲಕ ಕಳಿಸಬೇಕು.
ವಿ. ಪಿ. ಕಳಿಸಲಾಗುವುದಿಲ್ಲ.

**ಪ್ರಭಾತ ಆಫೀಸು, ರಥಬೀದಿ, ಮಂಗಳೂರು.**

# ಅಕ್ಬರ-ಬೀರಬಲ ವಿನೋದ

---

## ೧. ಅದನ್ನೇ ನನಗೂ ಕೊಡಿ

ಒಂದು ದಿನ ಅಕ್ಬರನು ತನ್ನ ಬೇಗಮರೊಂದಿಗೆ ಉದ್ಯಾನಕ್ಕೆ ತೆರಳಿ, ಅವರಿಗೆ ಗುಲಾಬಿ ಹೂಗಳನ್ನು ಕೊಯ್ದು ಕೊಡುತಿದ್ದನು. ಅಷ್ಟರಲ್ಲಿ ಬೀರಬಲನು ಅಲ್ಲಿಗೆ ಬಂದನು. ಓರ್ವ ಬೇಗಮಳು ಬಾದಶಹನೊಡನೆ "ನಿಮ್ಮ ಮಂತ್ರಿಯು ಬಲು ವಿನೋದಿ. ಇಂದು ನಾನೂ ಆತನೊಡನೆ ಪ್ರಶ್ನೆ ಕೇಳುವೆನೆ"ಂದು ಹೇಳಲು,—ಅಕ್ಬರನು ಬೀರಬಲನನ್ನು ಸಮೀಪಕ್ಕೆ ಬರಮಾಡಿದನು. ಬೀರಬಲನು ರಾಜನಿಗೆ ನಮಸ್ಕರಿಸದೆ, ಬಂದೊಡನೆಯೇ, ಹೂ ಕೊಯ್ಯಲಾರಂಭಿಸಿದನು. ಬೇಗಮಳು, "ಈ ನೌಕರನು ಕೂಲಿ ಕೊಡದೆಯೇ ಕೆಲಸಮಾಡುತ್ತಾನೆ" ಎಂದು ನಸುನಕ್ಕಳು. ತಕ್ಷಣ ಬೀರಬಲನು, "ಬೇಗಂ ಸಾಹಿಬಾ! ಒಬ್ಬ ನೌಕರನು (ಅಕ್ಬರ) ಮೊದಲೇ ಕೆಲಸಮಾಡುತ್ತಿದ್ದಾನೆ. ಅವನಿಗೆ ಏನು ಕೊಡುತ್ತೀರೋ ಅದನ್ನೇ ನನಗೂ ಕೊಡಬಲ್ಲಿರಾ?" ಎಂದನು. ಇದನ್ನು ಕೇಳಿ, ಬೇಗಂ ಅತ್ಯಂತ ಲಜ್ಜಿತಳಾದಳು.

## ೨. ಬೀರಬಲನ ಕಪ್ಪುಬಣ್ಣಕ್ಕೆ ಕಾರಣವೇನು?

ಒಂದು ದಿನ ಅಕ್ಬರನ ಆಸ್ಥಾನದಲ್ಲಿ ಸೌಂದರ್ಯದ ಕುರಿತು ಚರ್ಚೆಯಾರಂಭವಾಯಿತು. ಎಲ್ಲರೂ ಬೀರಬಲನ ಕಪ್ಪುಬಣ್ಣಕ್ಕಾಗಿ ಅವನನ್ನು ಪರಿಹಾಸ್ಯಮಾಡಿದರು. ಆ ಸಮಯದಲ್ಲಿ ಬೀರಬಲನು, ಅಲ್ಲಿರಲಿಲ್ಲ. ಸ್ವಲ್ಪ ಸಮಯದಲ್ಲಿ ಬೀರಬಲನು ಅಲ್ಲಿಗೆ ಬಂದಾಗ, ಎಲ್ಲರೂ ಅವನನ್ನು ನೋಡಿ, ವಿನೋದದ ನೆನಪಾಗಿ, ನಗಲಾರಂಭಿಸಿದರು. ನಗೆಯ ಕಾರಣ ತಿಳಿಯಲು ಬೀರಬಲನು ಉತ್ಸುಕನಾಗಿದ್ದರೂ ಬಾದಶಹನ ಮುಂದೆ ಹಾಗೆ ಕೇಳುವುದು ಯೋಗ್ಯವಲ್ಲವೆಂದು ಭಾವಿಸಿ, ಮೌನವಾಗಿದ್ದನು. ಸಮಯ ಸಾಧಿಸಿ ಅವನು ಬಾದಶಹನೊಡನೆ "ಮಹಾರಾಜರೇ! ಈ ದಿನ ತಾವು ಅತ್ಯಂತ ಸಂತೋಷದಿಂದಿರುವಂತೆ ತೋರುತ್ತದೆ" ಎನ್ನಲು, ಬಾದಶಹನು

ನಗುತ್ತ, “ನಿನ್ನ ಕುರೂಪತನಕ್ಕಾಗಿ ಎಲ್ಲರೂ ನಗುತ್ತಿದ್ದರು. ನಾವೆಲ್ಲರೂ ಬೆಳ್ಳಗಿರುವಾಗ ನೀನೊಬ್ಬನು ಕಪ್ಪೇಕೆ?” ಎಂದು ಪ್ರಶ್ನಿಸಿದನು. ಬೀರಬಲನು “ಅದರ ಕಾರಣ ತಮಗೆ ತಿಳಿದಿಲ್ಲವೆ?” ಎಂದು ಕೇಳಿದನು. ಬಾದಶಹನು, “ನನಗೆ ತಿಳಿಯದು, ನೀನೇ ತಿಳಿಸು” ಎಂದು ಹೇಳಲು, ಬೀರಬಲನು, “ಪರಮೇಶ್ವರನು ಸೃಷ್ಟಿಯನ್ನು ನಿರ್ಮಿಸಿದಾಗ ಮೊದಲು ಕ್ರಿಮಿಕೀಟಗಳನ್ನು ಸೃಷ್ಟಿಸಿದನು. ಆದರೆ, ಅಷ್ಟರಿಂದಲೇ ಸಂತುಷ್ಟನಾಗದೆ ನಾಲ್ಕು ಕಾಲಿನ ಪ್ರಾಣಿಗಳನ್ನೂ ಹಕ್ಕಿಗಳನ್ನೂ ಸೃಷ್ಟಿಸಿದನು. ಇದರಿಂದ ಅವನಿಗೆ ಸ್ವಲ್ಪ ಸಮಯದ ತನಕ ಸಂತೋಷವಾಯಿತು. ಅನಂತರ ಅವುಗಳಿಗಿಂತಲೂ ಶ್ರೇಷ್ಠವಾದ ಪ್ರಾಣಿಸೃಷ್ಟನೆ ಮಾಡಬೇಕೆಂಬ ವಿಚಾರವು ಅವನ ತಲೆಯಲ್ಲಿ ಸುಳಿದು, ಅವನು ಮನುಷ್ಯ ಪ್ರಾಣಿಯನ್ನು ಸೃಷ್ಟಿಸಿದನು; ತಾನು ಸೃಷ್ಟಿಸಿದ್ದನ್ನು ನೋಡಿ ಅತ್ಯಂತ ಸಂತೋಷಗೊಂಡನು. ಆ ಬಳಿಕ, ಅವನು ಮನುಷ್ಯನಿಗಾಗಿ ರೂಪ, ಸಂಪತ್ತು, ಬುದ್ಧಿ ಮತ್ತು ಶಕ್ತಿಗಳನ್ನು ಉಂಟುಮಾಡಿ, ಈ ನಾಲ್ಕು ವಸ್ತುಗಳನ್ನು ಒಂದರ ಬಳಿಯಲ್ಲಿ ಇನ್ನೊಂದನ್ನಿರಿಸಿ, ಅವು ಕೇವಲ ಮನುಷ್ಯನಿಗೆ ಮಾತ್ರ ಸಲ್ಲತಕ್ಕವುಗಳೆಂದೂ, ನಿಶ್ಚಿತ ಸಮಯದಲ್ಲಿ ಯಾರ್ಯಾರಿಗೆ ಯಾವ್ಯಾವ ವಸ್ತುವು ಎಷ್ಟೆಷ್ಟು ಪರಿಮಾಣದಲ್ಲಿ ಬೇಕೊ ಅಷ್ಟು ತೆಗೆದುಕೊಳ್ಳಬಹುದೆಂದೂ ಆಜ್ಞೆಯಿತ್ತನು. ಬುದ್ಧಿಯೇ ಉತ್ತಮವೆಂದು ಭಾವಿಸಿ ನಾನು, ಮೊದಲು ಅದನ್ನು ತೆಗೆದುಕೊಳ್ಳಲು ಹೋದೆ. ಅದನ್ನು ತೆಗೆದುಕೊಳ್ಳಲು ನನ್ನಣಿಕೆಗಿಂತ ಹೆಚ್ಚು ಸಮಯ ತಗಲಿದುದರಿಂದ ಇತರ ವಸ್ತುಗಳನ್ನು ಸ್ವೀಕರಿಸಲು ಹೋದಾಗ ನಿಶ್ಚಿತ ಸಮಯವು ದಾಟಿ ಹೋಗಿತ್ತೆಂದು ತಿಳಿಯಿತು. ನನ್ನ ದುರಾದೃಷ್ಟದಿಂದ ನಾನು ಕೇವಲ ಬುದ್ಧಿಯನ್ನು ಮಾತ್ರ ಪಡೆಯುವಂತಾಯಿತು. ತಾವು ಸೌಂದರ್ಯ ಮತ್ತು ಸಂಪತ್ತುಗಳನ್ನೂ ಪಡೆದಿರಿ; ಪೂರ್ಣ ಬುದ್ಧಿಯನ್ನು ಪಡೆಯಲಿಲ್ಲ. ನಾನು ಕಪ್ಪುಬಣ್ಣದವನಾಗಲು ಇದೇ ಕಾರಣ!” ಎಂದು ವಿವರಿಸಿದನು.

ಬೀರಬಲನು ತನ್ನ ಉತ್ತರದಿಂದ ರಾಜನನ್ನೂ ಇತರ ಸಭಾಸದರನ್ನೂ ಮಂದಬುದ್ಧಿಯವರನ್ನಾಗಿ ಮಾಡಿದ್ದನು. ಎಲ್ಲರೂ ಲಜ್ಜಿತರಾದರು. ಮನಸ್ಸಿನೊಳಗೇ ಬೀರಬಲನ ಬುದ್ಧಿಶಕ್ತಿಯನ್ನು ಕೊಂಡಾಡಿದರು.

## ೩. ಅಕ್ಬರನು ಬ್ರಾಹ್ಮಣನಾದುದು!

ಒಂದು ದಿನ ಸಾಯಂಕಾಲ ಅಕ್ಬರ–ಬೀರಬಲರಿಬ್ಬರೂ ಒಳ್ಳೆ ಅಶ್ವಗಳನ್ನೇರಿ, ವಾಯುವಿಹಾರಕ್ಕಾಗಿ ಹೊರಟರು. ಸುತ್ತಾಡುತ್ತ, ಯಮುನಾನದಿ ತೀರವನ್ನು ಸೇರಿದಾಗ, ಸಂಜೆಯು ಸಂಧ್ಯಾವಂದನಾಸಮಯವಾಗಿತ್ತು. ನದೀತಟದಲ್ಲಿ ಕೆಲವು ಬ್ರಾಹ್ಮಣರು ಸಂಧ್ಯಾವಂದನೆಯಲ್ಲಿ ನಿರತರಾಗಿದ್ದರು. ಬೀರಬಲನು ಸಹ ಕುದುರೆಯಿಂದಿಳಿದು ಸಂಧ್ಯಾವಂದನೆ ಮಾಡಲಾರಂಭಿಸಿದನು. ಅಕ್ಬರನು ತನ್ನ ಕುದುರೆಯ ಮೇಲೆ ಕುಳಿತು, ಇದೆಲ್ಲವನ್ನೂ ನೋಡುತಿದ್ದನು.

ಸಂಧ್ಯಾವಂದನವನ್ನು ತೀರಿಸಿ ಬೀರಬಲನು ತನ್ನ ಕುದುರೆಯನ್ನೇರಲು, ಇಬ್ಬರೂ ಮಾತನಾಡುತ್ತಾ ಅರಮನೆಯತ್ತ ಹೊರಟರು. ಹೀಗೆ ಬರುತ್ತಿರಲು, ಅಕ್ಬರನು ಬೀರಬಲನೊಡನೆ, "ಬೀರಬಲ್, ನನಗೂ ಸಂಧ್ಯಾವಂದನೆ ಮಾಡಲು ಕಲಿಸಿಕೊಡು" ಎಂದನು. ಬೀರಬಲನು "ಮಹಾಪ್ರಭು! ಸಂಧ್ಯಾವಂದನೆಯನ್ನು ಬ್ರಾಹ್ಮಣರು ಮಾತ್ರ ಮಾಡುವರು. ಅದನ್ನು ತಮಗೆ ಹೇಗೆ ಕಲಿಸಲಿ?" ಎಂದನು. ಅದಕ್ಕೆ ಅಕ್ಬರನು, "ಹಾಗಿದ್ದರೆ ನನ್ನನ್ನು ಬ್ರಾಹ್ಮಣನನ್ನಾಗಿ ಮಾಡು" ಎಂದನು. ಅದು ಅಸಾಧ್ಯವೆಂದು ಬೀರಬಲನು ಎಷ್ಟೇ ಹೇಳಿದರೂ, ಅಕ್ಬರನು ಕೇಳದೆ, ತಾನು ಬ್ರಾಹ್ಮಣನಾಗುವಂತೆ ಯಾವುದಾದರೊಂದು ಉಪಾಯ ಮಾಡಲೇಬೇಕೆಂದು ಬೀರಬಲನನ್ನು ಒತ್ತಾಯ ಪಡಿಸಿದನು. ಕೊನೆಗೆ, ಬೀರಬಲನು, "ಆಗಲಿ ಮಹಾಪ್ರಭು! ಸ್ವಲ್ಪ ಕಾಲಾವಕಾಶ ಬೇಕು" ಎನ್ನಲು ಅಕ್ಬರನು ಸಂತೋಷಗೊಂಡು ಅದಕ್ಕೊಪ್ಪಿದನು.

ಕೆಲವು ದಿನಗಳ ಬಳಿಕ ಬೀರಬಲನು ಮೂರು ನಾಲ್ಕು ಮಂದಿ ಕುಂಬಾರರನ್ನು ಕರೆಸಿ, "ನೀವು ನಾಳೆ ಸಾಯಂಕಾಲ ಒಂದು ಕತ್ತೆಯನ್ನು ಹಿಡಿದುಕೊಂಡು ಯಮುನಾತೀರಕ್ಕೆ ಹೋಗಿ, ಅದನ್ನು ನೀರ ಮಧ್ಯದಲ್ಲಿ ನಿಲ್ಲಿಸಿ, ಚೆನ್ನಾಗಿ ತಿಕ್ಕಿ ತೊಳೆಯುತ್ತಿರಬೇಕು. ನಾನು ಮತ್ತು ಬಾದಶಹರು ಅಲ್ಲಿಗೆ ಬಂದು ಹೀಗೆ ಅತಿ ಪ್ರಯತ್ನದಿಂದ ಕತ್ತೆಯನ್ನು ತಿಕ್ಕಿ ತೊಳೆಯುವ ಕಾರಣವನ್ನು ಕೇಳಿದಾಗ, 'ಈ ಕತ್ತೆಯನ್ನು ಕುದುರೆಯಾಗಿ ಮಾರ್ಪಡಿಸುತ್ತೇವೆಂದು ಹೇಳಬೇಕು" ಎಂದನು ಕುಂಬಾರರು ಒಪ್ಪಿ ಬೀರಬಲನ ಅಪ್ಪಣೆ ಪಡೆದು, ಹೊರಟುಹೋದರು.

ಬೀರಬಲನ ಆಜ್ಞೆಯಂತೆ ಮರುದಿನ ಸಾಯಂಕಾಲ ಅವರು ಒಂದು ಕತ್ತೆಯನ್ನು ಹಿಡಿದುಕೊಂಡು ಯಮುನಾತೀರಕ್ಕೆ ಹೋಗಿ, ಅದನ್ನು ನೀರ ಮಧ್ಯದಲ್ಲಿ ನಿಲ್ಲಿಸಿ, ತಿಕ್ಕಿ ತೊಳೆಯಲಾರಂಭಿಸಿದರು. ಎಂದಿನಂತೆ ಅಕ್ಬರ-ಬೀರಬಲರಿಬ್ಬರೂ ಗಾಳಿಸೇವನೆಗಾಗಿ ಹೊರಟವರು,—ಕತ್ತೆಯನ್ನು ತಿಕ್ಕಿ ತೊಳೆಯುವ ಸ್ಥಾನಕ್ಕೆ ಬಂದು ತಲಪಿದರು. ಮೂರು ನಾಲ್ಕು ಜನರು ಬಿರುಸಾಗಿ ಒಂದು ಕತ್ತೆಯನ್ನು ತಿಕ್ಕಿ ತೊಳೆಯುತ್ತಿರುವುದನ್ನು ನೋಡಿದ ಅಕ್ಬರನು, ಇದೇಕೆ ಎಂದು ವಿಚಾರಿಸಲು, ಬೀರಬಲನು ಅವರನ್ನೇ ಪ್ರಶ್ನಿಸಿ ತಿಳಿಯುವೆನೆಂದು ಹೇಳುತ್ತ, ಕುಂಬಾರರ ಬಳಿಗೆ ಹೋಗಿ, ಪ್ರಶ್ನಿಸಲು, ಅವರು—"ಮಹಾಪ್ರಭು! ಇದನ್ನು ಕುದುರೆಯಾಗಿ ಮಾಡುತ್ತೇವೆ" ಎಂದರು. ಬಾದಶಹನು ಅದನ್ನು ಕೇಳುತ್ತಲೇ ಗಹಗಹಿಸಿ ನಗುತ್ತ, ಬೀರಬಲನೊಡನೆ, "ಇವರೆಂತಹ ಮೂರ್ಖರು! ಎಲ್ಲಾದರೂ ಕತ್ತೆಯು ಕುದುರೆಯಾಗುವುದಿದೆಯೆ?" ಎಂದನು. ಆಗ ಬೀರಬಲನು ಅತಿ ವಿನಯದಿಂದ, "ಮಹಾಪ್ರಭು! ಕತ್ತೆಯು ಕುದುರೆಯಾಗುವುದು ಅಸಂಭವವಾದಾಗ ಮುಸಲ್ಮಾನನನ್ನು ಬ್ರಾಹ್ಮಣನನ್ನಾಗಿ ಮಾಡಲು ಸಾಧ್ಯವಿದೆಯೆ?" ಎಂದು ಕೇಳಿದನು. ಇದನ್ನು ಕೇಳಿದ ಬಾದಶಹನು ಲಜ್ಜಿತನಾಗಿ ಮತ್ತೆಂದೂ ಬ್ರಾಹ್ಮಣನಾಗುವ ಯೋಚನೆಯನ್ನೇ ಮಾಡಲಿಲ್ಲ.

## ೪. ವಿಚಿತ್ರ ಸ್ವಪ್ನ

ಒಂದು ದಿನ ಪ್ರಭಾತಕಾಲದಲ್ಲಿ ಅಕ್ಬರನು ಬೀರಬಲನೊಡನೆ "ಬೀರಬಲ್! ನಿನ್ನೆ ನಾನೊಂದು ಸ್ವಪ್ನ ನೋಡಿದೆ! ನಾನೊಂದು ಜೇನಿನ ಹೊಂಡದಲ್ಲಿ ಬಿದ್ದುಬಿಟ್ಟೆ—ಹಾಗೂ ನೀನೊಂದು ಪಾಯಖಾನೆ ಹೊಂಡದಲ್ಲಿ ಬಿದ್ದುಬಿಟ್ಟೆ!" ಎಂದನು. ಇದನ್ನು ಕೇಳಿ ಬೀರಬಲನು "ಮಹಾಪ್ರಭು! ನಾನೂ ಇದೇ ರೀತಿಯ ಸ್ವಪ್ನ ನೋಡಿದೆ; ಆದರೆ, ಸ್ವಲ್ಪ ಮಾತ್ರ ವ್ಯತ್ಯಾಸ. ನಾನು ತಮ್ಮ ಮೈಯನ್ನು ನೆಕ್ಕಲಾರಂಭಿಸಿದೆ, ತಾವು ನನ್ನ ಮೈಯನ್ನು ನೆಕ್ಕಲಾರಂಭಿಸಿದಿರಿ" ಎಂದನು. ಇದನ್ನು ಕೇಳಿ, ಅಕ್ಬರನು ಅತ್ಯಂತ ಲಜ್ಜಿತನಾದನು.

## ೫. ಬಳೆ ಮತ್ತು ಗಡ್ಡ

ಒಂದು ದಿನ ಅಕ್ಬರ-ಬೀರಬಲರಿಬ್ಬರೂ ಏಕಾಂತದಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದರು. ಆಗ ಬಾದಶಹನಿಗೆ, ಒಂದು ಸುಲಭ ಪ್ರಶ್ನೆಯಿಂದ

ಬೀರಬಲನನ್ನು ಸೋಲಿಸಬೇಕೆಂದೆನಿಸಿತು. ಕೂಡಲೇ, "ಬೀರಬಲ! ನಿನ್ನ ಪತ್ನಿಯ ಕೈಯನ್ನು ನೀನು ಪ್ರತಿದಿನ ಸ್ಪರ್ಶಿಸುತ್ತಿರಬಹುದು. ಆಕೆಯ ಕೈಯಲ್ಲಿ ಎಷ್ಟು ಬಳೆಗಳಿವೆಯೆಂದು ಹೇಳು" ಎಂದನು. ಬೀರಬಲನು ಎಂದೂ ಸುಳ್ಳಾಡುತ್ತಿರಲಿಲ್ಲ. ಅವನು "ಮಹಾಪ್ರಭು! ನನ್ನ ಕೈಯಾದರೋ ದಿನಕ್ಕೆ ಒಂದೆರಡಾವರ್ತಿ ಹೆಂಡತಿಯ ಕೈಗೆ ತಗಲುತ್ತಿರಬಹುದು. ಆದರೆ, ತಮ್ಮ ಕೈಯು ಗಡ್ಡಕ್ಕೆ ನೂರಾರು ಸಲ ತಗಲುತ್ತಿದೆ. ಆದುದರಿಂದ ತಾವು ತಮ್ಮ ಗಡ್ಡದಲ್ಲಿ ಎಷ್ಟು ಕೂದಲುಗಳಿವೆಯೆಂದು ಹೇಳಿರಿ! ಎಂದನು. ಇದನ್ನು ಕೇಳಿ ಬಾದಶಹನು ನಿರುತ್ತರನಾದನು.

ಸ್ವಲ್ಪ ಹೊತ್ತಿನ ಬಳಿಕ, ಗಡ್ಡದ ಕೂದಲುಗಳನ್ನು ಯಾರೂ ಎಣಿಸಲಾರರು. ಆದರೆ, ಕೈಬಳೆಗಳನ್ನು ನೀನು ಖಂಡಿತವಾಗಿಯೂ ಎಣಿಸಿರಬಹುದು" ಎನಲು ಬೀರಬಲನು, "ಹೆಂಗಸರಿಗೆ ಯಾವ ನಿಯಮ? ಒಂದು ದಿನ ಹೆಚ್ಚು ಬಳೆಗಳನ್ನು ತೊಟ್ಟುಕೊಳ್ಳುತ್ತಾರೆ; ಇನ್ನೊಂದು ದಿನ ತೆಗೆದಿರಿಸುತ್ತಾರೆ. ಆದುದರಿಂದ ಹೇಗೆ ಹೇಳಲಿ? ಆದರೆ, ತಾವು ಯಾವಾಗಲೂ ಮಾಳಿಗೆಗೆ ಹತ್ತುವ ಏಣಿಯಲ್ಲಿ ಎಷ್ಟು ಮೆಟ್ಟಲುಗಳಿವೆಯೆಂದು ಹೇಳಿರಿ" ಎಂದು ಕೇಳಿದನು. ಬಾದಶಹನು "ಬೀರಬಲ, ನಾನವುಗಳನ್ನು ಎಣಿಸಿಲ್ಲ" ಎಂದನು. ಅಗ ಬೀರಬಲನು, "ಮಹಾಪ್ರಭು! ಏಣಿಯ ಮೆಟ್ಟಲುಗಳಂತಹ ವಸ್ತುವನ್ನೇ ನೀವೆಣಿಸದಿರುವಾಗ ಬಳೆಗಳನ್ನು ಹೇಗೆ ಎಣಿಸಲಿ?" ಎಂದು ಹೇಳಲು, ಬೀರಬಲನ ಈ ಉತ್ತರವನ್ನು ಕೇಳಿ ಅಕ್ಬರನು ಸಂತೋಷಗೊಂಡನು.

## ೬. ಬೀರಬಲನ ರಾಣಿ ಮತ್ತು ಬೇಗಂ

ಬೀರಬಲನ ಭಾರ್ಯೆ ಅತ್ಯಂತ ಸುಂದರಿಯಾಗಿದ್ದಳು. ಒಂದು ದಿನ ಅಕ್ಬರನು ಆಕೆಯನ್ನು ನೋಡಿದನು. ಕೆಲದಿನಗಳ ಬಳಿಕ, ಆತನು ದರ್ಬಾರಿನಲ್ಲಿಬೀರಬಲನೊಡನೆ "ನಿನ್ನ ರಾಣಿಯು ಅತ್ಯಂತ ಸುಂದರಿಯಾಗಿರುವಳು" ಎಂದನು. ಅದಕ್ಕೆ ಬೀರಬಲನು, "ಮಹಾಪ್ರಭು! ನಾನು ಸಹ ಮೊದಲು ಹಾಗೆ ಭಾವಿಸಿಕೊಂಡಿದ್ದೆ. ಆದರೆ, ಬೇಗಂ ಸಾಹಿಬಾರವರನ್ನು ನೋಡಿದ ಬಳಿಕ ನನ್ನ ಭಾವನೆಯು ಬದಲಾಯಿಸಿದೆ" ಎಂದನು. ಇದನ್ನು ಕೇಳಿ, ಅಕ್ಬರನು ಅತಿ ಹರ್ಷಗೊಂಡನು.

## ೭. ತಾವೇ ಅವಲಕ್ಷಣ!

ಒಂದು ದಿನ ಬೀರಬಲನು, ತಮ್ಮ ರಾಜ್ಯದಲ್ಲಿ ಒಬ್ಬ ಅವಲಕ್ಷಣ ಮನುಷ್ಯನಿದ್ದಾನೆಂದೂ ಬೆಳಗ್ಗೆ ಎದ್ದೊಡನೆ ಆತನ ಮುಖದರ್ಶನ ಮಾಡಿದರೆ ಆ ದಿನ ಅನ್ನಾಹಾರ ಸಿಗುವುದಿಲ್ಲವೆಂದೂ ಆಸ್ಥಾನದಲ್ಲಿ ಹೇಳಿದನು. ಕೂಡಲೇ ಅಕ್ಬರನು ಆ ಮನುಷ್ಯನನ್ನು ತನ್ನಲ್ಲಿಗೆ ಕರೆಸಿ ತಾನೂ ಆತನ ಅವಲಕ್ಷಣತ್ವವನ್ನು ಪರೀಕ್ಷಿಸಬೇಕೆಂದು ಹೇಳಿ, ಆತನನ್ನು ಹಿಡಿದು ತರುವಂತೆ ಆಜ್ಞೆಯಿತ್ತನು.

ಬೀರಬಲನು ರಾಜಾಜ್ಞೆಯಂತೆ ಆತನನ್ನು ಹಿಡಿಸಿತರಿಸಿದನು. ಮರುದಿನ ಬೆಳಗ್ಗೆ ಎದ್ದೊಡನೆ ರಾಜನು ಆತನ ಮುಖ ನೋಡಿ ಎಂದಿನಂತೆ ದರ್ಬಾರಿಗೆ ಬಂದನು. ಅಂದು ರಾಜಕಾರ್ಯಗಳು ಹಲವಿದ್ದು, ರಾಜನಿಗೆ ಊಟಮಾಡಲು ಸಹ ಅನುದೊರೆಯಲಿಲ್ಲ. ಆಗ ಬಾದಶಹನು, "ನಿಸ್ಸಂದೇಹವಾಗಿಯೂ ಅತಿ ಅವಲಕ್ಷಣಿ. ಅವನನ್ನು ಕೂಡಲೇ ಬರಮಾಡಿ" ಎಂದನು. ಆ 'ಅವಲಕ್ಷಣಿ'ಯು ಹಾಜರಾಗಲು, ಬಾದಶಹನು ಅವನಿಗೆ ಮರಣದಂಡನೆಯನ್ನು ಕೊಡಿರೆಂದು ಹೇಳಿದನು. ಆ ಬಡವನು, "ಮಹಾಪ್ರಭು! ನನಗೆ ಯಾತಕ್ಕೋಸ್ಕರ ಈ ಶಿಕ್ಷೆಯೆಂದು ತಿಳಿಯಬಹುದೇ?" ಎಂದು ಕೇಳಲು, ಬಾದಶಹನು "ನೀನು ಅವಲಕ್ಷಣಿ. ಬೆಳಗ್ಗೆ ಎದ್ದು ನಿನ್ನ ಮುಖಾವಲೋಕನ ಮಾಡಿದವನಿಗೆ, ಅಂದು ಅನ್ನಾಹಾರ ಸಿಗುವುದಿಲ್ಲ, ಇಂದು ನಾನೂ ಇದನ್ನು ಪರೀಕ್ಷಿಸಿಯಾಯಿತು" ಎಂದನು.

ಇದನ್ನು ಕೇಳಿದಾಕ್ಷಣ ಬೀರಬಲನು "ಮಹಾಪ್ರಭು! ತಮಗಾದರೋ ಈತನ ಮುಖದರ್ಶನಮಾಡಿದುದರಿಂದ ಅನ್ನಾಹಾರ ಸಿಗಲಿಲ್ಲ. ಆದರೆ, ಈತನಿಗೆ ತಮ್ಮ ಮುಖದರ್ಶನಮಾಡಿದುದರಿಂದ ಮರಣದಂಡನೆಯೇ ದೊರೆಯುವಂತಾಯಿತು! ಆದುದರಿಂದ ಹೆಚ್ಚು ಅವಲಕ್ಷಣ ಸ್ವರೂಪದವರು ಯಾರು ಅಂತ ತಾವೇ ನಿರ್ಧರಿಸಬೇಕು" ಎಂದನು. ಬೀರಬಲನ ಉತ್ತರಕೇಳಿ ಅಕ್ಬರನು, ತನ್ನ ತಪ್ಪಿಗಾಗಿ ನಾಚಿ, ಆ ಮನುಷ್ಯನನ್ನು ಬಿಡುಗಡೆಮಾಡಿದನು.

## ೮. ಅರ್ಥ ತಮಗೆ!

ಒಂದು ದಿನ ಅಕ್ಬರ-ಬೀರಬಲರಿಬ್ಬರೂ ವಾಯುವಿಹಾರಕ್ಕಾಗಿ ಹೋಗುತ್ತಿದ್ದಾಗ, ಅಕ್ಬರನು, "ಬೀರಬಲ, ಭೂಮಿಯನ್ನೇ ನೋಡುತ್ತ

ಏಕೆ ನಡೆಯುತ್ತಿ?" ಎಂದು ಪ್ರಶ್ನಿಸಿದನು. ಅದಕ್ಕೆ ಬೀರಬಲನು, "ನಮ್ಮಪ್ಪನು ಕಾಣೆಯಾಗಿದ್ದಾನೆ" ಎಂದುತ್ತರವಿತ್ತನು.

"ನಾನು ಹುಡುಕಿಕೊಟ್ಟರೆ ನನಗೇನು ಕೊಡುತ್ತಿಯಾ" ಎಂದು ಅಕ್ಬರನು ಕೇಳಲು, ಬೀರಬಲನು, "ಅರ್ಧ ತಂದೆ ನನಗೆ, ಅರ್ಧ ತಮಗೆ" ಎಂದುತ್ತರವಿತ್ತನು. ಇದನ್ನು ಕೇಳಿ ಅಕ್ಬರನಿಗೆ ತಡೆಯಲಾರದಷ್ಟು ನಗು ಬಂತು.

## ೯. ಎತ್ತಿನ ಹಾಲು!

ಒಂದು ದಿನ ಅಕ್ಬರನು, ಬೀರಬಲನ ಜಾಣ್ಮೆಯು ಇನ್ನೊಂದು ಮಾದರಿ ತಿಳಿಯಲಪೇಕ್ಷಿಸಿ, ಎತ್ತಿನ ಹಾಲು ತಂದುಕೊಡಬೇಕೆಂದು ಬೀರಬಲನಿಗೆ ಅಜ್ಞೆಯಿತ್ತನು. ಇದನ್ನು ಕೇಳಿ ಆಶ್ಚರ್ಯಗೊಂಡ ಬೀರಬಲನು ದಿಕ್ಕು ಕಾಣದೆ, ಈ ಕೆಲಸಕ್ಕೆ ತನಗೆ ಸ್ವಲ್ಪ ಕಾಲಾವಕಾಶ ಕೊಡಬೇಕೆಂದು ಕೇಳಿ, ಮನೆಗೆ ಬಂದು, ಬೇಸರದಿಂದ ಮಂಚದ ಮೇಲೆ ಬಿದ್ದುಕೊಂಡನು. ಬೀರಬಲನ ರಾಣಿಯು, ಗಂಡನ ಈ ವಿಚಿತ್ರ ಅವಸ್ಥೆಯನ್ನು ನೋಡಿ ಹಾಗೆ ಚಿಂತಾಕ್ರಾಂತನಾಗಲು ಕಾರಣವೇನೆಂದು ಕೇಳಲು, ಆತನು ರಾಜಾಜ್ಞೆಯನ್ನು ತಿಳಿಸಿ "ಇದಕ್ಕೆ ಏನುತ್ತರ ಕೊಡುವುದೆಂದು ತಿಳಿಯುವುದಿಲ್ಲ" ವೆಂದನು. ಆಗ ಆಕೆ, "ಇದೇನು ಮಹಾ! ನೀವು ಮನೆಯಲ್ಲಿ ಕೂತಿರಿ, ನಾನಿದಕ್ಕೆ ಉತ್ತರವಿತ್ತು ಬರುವೆನೆ"ಂದಳು.

ಮರುದಿನ ಬೆಳಗ್ಗೆ ಹಲವು ಬಟ್ಟೆಗಳನ್ನೆತ್ತಿಕೊಂಡು ಯಮುನಾತೀರಕ್ಕೆ ಹೋಗಿ ಅಲ್ಲಿ ಬಟ್ಟೆ ತೊಳೆಯಲಾರಂಭಿಸಿದಳು. ಈ ದೃಶ್ಯವು ಕೋಟೆಯ ಮೇಲೆ ನಿಂತು ಸುತ್ತಲೂ ನೋಡುತ್ತಿರುವ ಬಾದಶಹನ ಕಣ್ಣಿಗೆ ಬಿತ್ತು. ಅಷ್ಟು ಮುಂಜಾನೆ ಅದಾರು ಬಟ್ಟೆ ಒಗೆಯುತ್ತಿರುವರೆಂದು ತಿಳಿದು ಬರಲು, ಅವನು ನೌಕರನನ್ನು ಕಳುಹಿಸಿದನು. ನೌಕರನು ಆಕೆಯನ್ನು ಬಾದಶಹನ ಬಳಿಗೆ ಕರೆದೊಯ್ದನು. ಅಕ್ಬರನು ಅವಳನ್ನು ಕುರಿತು, "ಇದೇಕೆ ಇಷ್ಟು ಮುಂಜಾನೆ ಬಟ್ಟೆ ಒಗೆಯುವೆ? ಇಂದೇನು ವಿಶೇಷ?" ಎಂದು ಪ್ರಶ್ನಿಸಿದನು. ಆಕೆ, "ಮಹಾಪ್ರಭು! ನಾನು ಮಡಿವಾಳ್ತಿಯಲ್ಲ. ಬೀರಬಲನು ಹೆತ್ತು, ಬಾಣಂತಿಕೊಠಡಿಯಲ್ಲಿ ಮಲಗಿರುತ್ತಾನೆ. ಆದುದರಿಂದ ನಾನು ಬೆಳಿಗ್ಗೆ ಬಟ್ಟೆ ಒಗೆಯಲು ಬಂದೆನೆ"ಂದಳು.

ಇದನ್ನು ಕೇಳಿ ನಗುತ್ತ ಬಾದಶಹನು "ಎಲ್ಲಾದರೂ ಗಂಡುಸರು ಹೆರುವುದಿದೆಯೆ?" ಎಂದು ಕೇಳಲು, ಅವಳು ಮರುಪ್ರಶ್ನೆಯನ್ನು ಬಾದ

ಶಹನ ಮುಖಕ್ಕೇ ಒಗೆದಳು: "ಮಹಾಪ್ರಭು! ಎಲ್ಲಾದರೂ ಎತ್ತು ಹಾಲು ಕೊಡುವುದಿದೆಯೇ?"

ಬಾದಶಹನು ನಿರುತ್ತರನಾದನು, ಮತ್ತು ಆತೆಗೆ ಪುರಸ್ಕಾರವನ್ನಿತ್ತು ಕಳುಹಿಸಿದನು.

## ೧೦. ಚಳಿ ಎಷ್ಟು?

ಚಳಿಗಾಲದಲ್ಲಿ ತುಂಬ ಹಿಮ ಬೀಳುತ್ತಿದ್ದ ಸಮಯ. ಒಂದು ದಿನ ಬೆಳಿಗ್ಗೆ ಅಕ್ಬರನು ಬೀರಬಲನೊಡನೆ ಅರಮನೆ ಕೋಟೆಯ ಮೇಲಿನ ಒಂದು ಆಸನದಲ್ಲಿ ಮಂಡಿಸಿದ್ದನು. ವಾಕ್ಚಾತುರ್ಯದಲ್ಲಿ ಅಪ್ರತಿಮನಾದ ಬೀರಬಲನನ್ನು, ಒಮ್ಮೆಯಾದರೊಮ್ಮೆ ವಿಚಿತ್ರ ಪ್ರಶ್ನೆಯಿಂದ ದಿಗಿಲುಗೊಳಿಸಿ ಸೋಲಿಸಬೇಕೆಂದು ಬಾದಶಹನಿಗನಿಸಿತು. ಕೂಡಲೇ,—"ಬೀರಬಲ್! ಈಗ ಚಳಿ ಎಷ್ಟಿದೆ?" ಎಂದು ತಟ್ಟನೆ ಕೇಳಿದನು. ಬೀರಬಲನು, "ಮಹಾಪ್ರಭು! ಎರಡು ಮುಷ್ಠಿ ತುಂಬ!" ಎಂದು ಮಾರುತ್ತರ ಕೊಟ್ಟನು. ಅಕ್ಬರನು "ಅದು ಹೇಗೆ?" ಎನ್ನಲು ಕೋಟೆಯ ಕೆಳಗೆ ರಸ್ತೆಯಲ್ಲಿ ತನ್ನ ಎರಡು ಮುಷ್ಠಿಗಳನ್ನೂ ಬಿಗಿಹಿಡಿದು, (ಕಂಕುಳಲ್ಲಿ ಒತ್ತಿ) ಹೋಗುತ್ತಿದ್ದ ಒಬ್ಬ ಬಡವನನ್ನು ತೋರಿಸಿದನು. ಅಕ್ಬರನು ಬೀರಬಲನ ಜಾಣತನಕ್ಕೆ ತಲೆದೂಗಿದನು.

## ೧೧. ನಾಲ್ವರಿಗೆ ಒಬ್ಬಳು!

ಒಂದು ದಿನ ಅಕ್ಬರ ಬಾದಶಹನು ಬೀರಬಲನೊಡನೆ, "ಒಬ್ಬ ಲಜ್ಜಾವಂತ, ಒಬ್ಬ ನಿರ್ಲಜ್ಜ, ಒಬ್ಬ ವೀರ ಹಾಗೂ ಹೇಡಿ—ಹೀಗೆ ನಾಲ್ವರನ್ನು ತಂದುಕೊಡೆ"ಂದು ಕೇಳಿದನು. ಮರುದಿನ ಬೆಳಗ್ಗೆ ಬೀರಬಲನು ಒಬ್ಬಳು ಹೆಂಗಸನ್ನು ಕರೆದುಕೊಂಡು ಬಾದಶಹನ ಬಳಿಗೆ ಹೋದನು. ಅಕ್ಬರನು, "ತಂದಿರುವೆಯಾ?" ಎಂದು ಕೇಳಲು, "ತಂದಿರುವೆನು" ಎಂದು ಹೇಳಿ, ಆಕೆಯನ್ನು ಬಾದಶಹನ ಸಮ್ಮುಖದಲ್ಲಿ ತಂದು ನಿಲ್ಲಿಸಿದನು. ಆಗ ಬಾದಶಹನು "ನಾನು ನಾಲ್ವರನ್ನು ಕರೆತರಲು ಹೇಳಿದ್ದೆ. ಉಳಿದ ಮೂವರೆಲ್ಲಿ?" ಎಂದು ಕೇಳಿದನು. ಬೀರಬಲನು, "ಮಹಾರಾಜರೆ! ಇವಳಲ್ಲಿ ನಾಲ್ಕೂ ಗುಣಗಳಿವೆ" ಎಂದನು. ಬಾದಶಹನು "ಅದೆಂತು?" ಎಂದು ಕೇಳಲು, ಬೀರಬಲನು, "ಮಹಾರಾಜ! ಈಕೆಯು ಮಾನವನ ಮನೆಯಲ್ಲಿದ್ದಾಗ ಲಜ್ಜೆ

ಈಕೆಯು ಬಾಯಿಯಿಂದ ಮಾತು ಸಹ ಹೊರಡುತ್ತಿರಲಿಲ್ಲ. ಆದರೆ, ಎಲ್ಲಾದರೂ ಹಾಡಲಾರಂಭಿಸಿದರೆ ತಂದೆ-ತಾಯಿ, ಅತ್ತೆ-ಮಾವಂದಿರನ್ನೂ ಲೆಕ್ಕಿಸದೆ ನಿರ್ಲಜ್ಜೆಯಿಂದ ಹಾಡುವಳು. ಗಂಡನ ಜೊತೆ ಕುಳಿತಿರುವಾಗ ಒಬ್ಬಳೇ ಎದ್ದು ಮನೆಯೊಳಗೆ ಹೋಗಲು ಸಹ ಹೆದರಿ, ಗಂಡನೊಡನೆ ಹೆದರಿಕೆಯಾಗುತ್ತದೆನ್ನುವಳು. ಆದರೆ, ಯಾರೊಡನಾದರೂ, ಪ್ರೇಮವಾದರೆ ಮಧ್ಯರಾತ್ರಿಯಲ್ಲಾದರೂ ಸಹ ನಿರ್ಭೀತಿಯಿಂದ ತನ್ನ ಮನದನ್ನನಲ್ಲಿಗೆ ಹೋಗುತ್ತಾಳೆ. ಆಗ ಕಳ್ಳಕಾಕರ ಅಥವಾ ಭೂತಪ್ರೇತಗಳ ಭಯ ಸಹ ಈಕೆಗಿರುವುದಿಲ್ಲ” ಎಂದು ಹೇಳಿದನು. ಬಾದಶಹನು, ಬೀರಬಲನ ಮಾತುಗಳಿಗೆ ತಲೆದೂಗಿದನು.

## ೧೨. ಸುಖಿ ಯಾರು?

ಒಂದು ದಿನ ದರ್ಬಾರಿನಲ್ಲಿ ಅಕ್ಬರನು ಬೀರಬಲನೊಡನೆ ಪ್ರಪಂಚದಲ್ಲಿ ಸುಖಿಯಾದವನು ಯಾರೆಂದು ಕೇಳಿದನು. ಬೀರಬಲನು, “ಮಹಾಪ್ರಭು! ಜೀವಿತ ಮನುಷ್ಯನು ಸುಖಿಯಾಗಲಾರನು. ಆದರೆ, ಸತ್ತವನನ್ನು ಜನರು ಸುಖಿಯೆನ್ನುತ್ತಾರೆ” ಎಂದನು. ಅಕ್ಬರನು, ಹಾಗಾಗಲು ಕಾರಣವೇನೆಂದು ಕೇಳಲು, ಬೀರಬಲನು “ಇಂದು ಸುಖಿಯಾಗಿರುವ ಮನುಷ್ಯನಿಗೆ ನಾಳೆ ಯಾವ ಅದೃಶ್ಯ ವಿಪತ್ತು ಕಾದಿದೆಯೆಂದು ಹೇಳಲಾಗುವುದಿಲ್ಲ. ಹೀಗಿರುವಾಗ ಹೊರದೃಷ್ಟಿಯಿಂದ ಒಬ್ಬನು ಸುಖಿಯಾಗಿ ತೋರಿದರೂ ಆತನ ಅಂತಃಕರಣದಲ್ಲಿರುವ ಸುಖ-ದುಃಖ ಭಾವನೆಯು ಹೇಗೆ ದೂರವಾದೀತು? ಆದುದರಿಂದ ಸತ್ತ ಬಳಿಕವೇ ಮನುಷ್ಯನು ಸುಖಿಯಾಗುವನು” ಎಂದು ಹೇಳಿದನು. ಬೀರಬಲನ ಈ ಉತ್ತರವು ಅಕ್ಬರನಿಗೆ ಅಪಾರ ಸಮಾಧಾನವಿತ್ತಿತು.

## ೧೩. ಕೊನೆಗಾಣದ ಕತೆ!

ಅಕ್ಬರನು ಪ್ರತಿನಿತ್ಯ ರಾತ್ರಿ ತನ್ನ ಆಸ್ಥಾನ ವಿದ್ವಾಂಸರಿಂದ ಒಂದೊಂದು ಹೊಸ ಕತೆಯನ್ನು ಕೇಳುತಿದ್ದನು. ಒಂದು ದಿನ ಬೀರಬಲನ ಸರದಿ ಬಂತು. ಬೀರಬಲನು ನೂರಾರು ಶಬ್ದಗಳಷ್ಟು ಕತೆ ಹೇಳಿದಾಗ ಬಾದಶಹನು “ಮುಂದೇನು?” ಎಂದು ಹೇಳಿ ಸುಮ್ಮನಾಗುತ್ತಿದ್ದನು. ಈ ರೀತಿಯಾಗಿ ಒಂದು ಕತೆ ಹೇಳಿ ಮುಗಿಸಲು ಒಂದು ಗಂಟೆ ಸಮಯ ಹಿಡಿ

ಯಿತು. ಕತೆ ಹೇಳುವಾಗ ಬೀರಬಲನು ತಾನು ಮಾತ್ರ ಪರಿಶ್ರಮ ಪಡುತ್ತಿರುವುದನ್ನೂ, ರಾಜನು ಸುಮ್ಮನೆ ಕುಳಿತು ಕೇಳುತ್ತಿರುವುದನ್ನೂ ನೋಡಿ ಮನಸ್ಸಿನಲ್ಲಿಯೇ ಸಿಟ್ಟುಗೊಳ್ಳುತಿದ್ದನು. ಆದರೆ, ಮಾಡಲೇನು? ಬಾದಶಹನು ಒಳ್ಳೆಯ ದೊಡ್ಡ ಕತೆ ಹೇಳಲು ಅಪ್ಪಣೆಯಿತ್ತಿದ್ದನು. ಆದುದರಿಂದ ಬಾದಶಹನು ಬೇಸರಗೊಳ್ಳುವಂತಹ ಕತೆ ಹೇಳಬೇಕೆಂದು ಯೋಚಿಸಿ, ಹೇಳಲಾರಂಭಿಸಿದನು: "ಒಬ್ಬ ರೈತನು ಭತ್ತ ಹಾಕುವ ಒಂದು ದೊಡ್ಡ ಕಣಜವನ್ನು ಮಾಡಿಸಿದನು. ಗಾಳಿಯು ಪ್ರವೇಶಕ್ಕೆ ಸಹ ಎಡೆ ಬಿಟ್ಟಿರಲಿಲ್ಲ. ಆದರೊಳಗೆ ತುಂಬ ಭತ್ತ ತುಂಬಿಸಿ ಅದನ್ನು ಮುಚ್ಚಿದನು. ಆದರೆ, ಆತ ನಿಗರಿಯದೆ ದುರದೃಷ್ಟವಶಾತ್ ಆದರಲ್ಲಿ ಒಂದು ತೂತು ಉಳಿದು ಹೋಯಿತು. ಒಂದು ಹಕ್ಕಿಯು ಆ ಛಿದ್ರದ ಮೂಲಕ ಕಣಜದ ಒಳಗೆ ಹೋಗಿ ತನಗೆ ಬೇಕಾದಷ್ಟು ಕಾಳುಗಳನ್ನು ಹೆಕ್ಕಿ 'ಫರ್' ಎಂದು ಹಾರಿ ಹೋಯಿತು. ಬಳಿಕ ಇನ್ನೊಂದು ಪಕ್ಷಿಯು ಒಳಗೆ ಹೋಗಿ ಭತ್ತದ ಕಾಳುಗಳನ್ನು ಹೆಕ್ಕಿ ಹೊರಗೆ ಬಂದು 'ಫರ್' ಎಂದು ಓಡಿಹೋಯಿತು. ಅನಂತರ ಮತ್ತೊಂದು ಬಂದು ಭತ್ತದ ಕಾಳುಗಳನ್ನು ಹೆಕ್ಕಿ ಹೊರಕ್ಕೆ ಬಂದು 'ಫರ್' ಎಂದು ಹಾರಿಹೋಯಿತು........"

ಇದೇ ರೀತಿ ನೂರಾರು ಬಾರಿ ಬೀರಬಲನು ಹೇಳುವ ತನಕ ಅಕ್ಬರನು "ಮುಂದೇನು? ಮುಂದೇನು?" ಎಂದು ಹೇಳುತ್ತ ಹೋದನು. ಕೊನೆಗೆ ಬೇಸರಗೊಂಡು "ಮಹಾರಾಯಾ! ಆದೆಲ್ಲ ಆಗಿಹೋಯಿತು. ಮುಂದೇನು ಹೇಳು" ಎಂದನು.

ಬೀರಬಲನು "ಮಹಾಪ್ರಭು! ಭತ್ತದ ಆಸೆಯಿಂದ ಅಲ್ಲಿ ಲಕ್ಷಾಂತರ ಪಕ್ಷಿಗಳು ಬಂದು ಸೇರಿದುವು. ಆದರೂ, ಕಣಜದ ಒಂದಿಷ್ಟು ಭಾಗವಾದರೂ ಖಾಲಿಯಾಗಲಿಲ್ಲ. ಎಲ್ಲ ಹಕ್ಕಿಗಳ ಹೊಟ್ಟೆ ತುಂಬಿದ ಮೇಲೆ ಕತೆಯು ಮುಂದುವರಿಯುವುದು. ಹಾಗೆ ಅವುಗಳ ಹೊಟ್ಟೆ ತುಂಬಲು ವರ್ಷಗಟ್ಟಲೆ ಸಮಯ ಬೇಕಾಗುವುದು" ಎಂದನು.

ಇದನ್ನು ಕೇಳಿ ಗಾಬರಿಗೊಂಡ ಅಕ್ಬರನು, "ಸರಿ, ಹಾಗಿದ್ದರೆ, ಕತೆಯನ್ನು ಬಿಟ್ಟುಬಿಡು" ಎಂದು ಹೇಳಿದನು.

## ೧೪. ಕಳ್ಳನ ಗಡ್ಡದಲ್ಲಿ ಹುಲ್ಲುಕಡ್ಡಿ!

ಒಂದು ಸಲ ಅಕ್ಬರನ ಅತ್ಯಮೂಲ್ಯವಾದ ರತ್ನಹಾರವು ಕಳವಾಗಿ ಹೋಯಿತು. ಪಟ್ಟಣದ ಕೊತ್ವಾಲನು ಬಹಳ ಪ್ರಯತ್ನಪಟ್ಟು ಪತ್ತೆಹಚ್ಚ ಬಯಸಿದರೂ ಪ್ರಯೋಜನವಾಗಲಿಲ್ಲ. ಕೊನೆಗೆ ಅಕ್ಬರನು ಆ ಕೆಲಸ ವನ್ನು ಬೀರಬಲನಿಗೆ ಒಪ್ಪಿಸಿದನು.

ಬೀರಬಲನು, ರತ್ನಹಾರವಿದ್ದ ಆ ಪೆಟ್ಟಿಗೆಯನ್ನು ತರಿಸಿದರೆ ತಾನು ಸ್ವಲ್ಪ ಪ್ರಯತ್ನಿಸಬಹುದೆಂದು ಹೇಳಿದನು. ಕೂಡಲೇ ಆ ಪೆಟ್ಟಿಗೆಯನ್ನು ತರಿಸಲಾಯಿತು. ಬೀರಬಲನು ಆ ಪೆಟ್ಟಿಗೆಯೊಳಗೆ ಕಿವಿಯನ್ನಿಟ್ಟು ಸ್ವಲ್ಪ ಹೊತ್ತು ಏನೋ ಕೇಳುವವನಂತೆ ನಟಿಸಿ, ಬಳಿಕ ರಾಜನೊಡನೆ, "ಈ ಪೆಟ್ಟಿಗೆಯು ಕಳ್ಳನ ಗಡ್ಡದಲ್ಲಿ ಹುಲ್ಲುಕಡ್ಡಿಯಿದೆಯೆಂದು ಹೇಳುತ್ತದೆ"ದನು.

ಬೀರಬಲನ ಮಾತನ್ನು ಕೇಳಿದೊಡನೆಯೇ ಒಬ್ಬ ಸಭಾಸದನ ಕೈಯು ಗಡ್ಡದ ಮೇಲೆ ಹೋಯಿತು. ಕೂಡಲೇ ಬೀರಬಲನು ಅತನನ್ನು ಹಿಡಿಸಿದನು. ಸ್ವಲ್ಪ ಗದರಿಸಿದ ಬಳಿಕ ಅತನು ಆ ರತ್ನಹಾರವನ್ನು ಹಿಂದಕ್ಕೆ ತಂದುಕೊಟ್ಟನು. ಬೀರಬಲನ ಚಾತುರ್ಯವನ್ನು ನೋಡಿ ರಾಜನು ಸಂತೋಷಗೊಂಡನು.

## ೧೫. ಅಯೋಗ್ಯನೊಡನೆ ಹೇಗೆ ವರ್ತಿಸಬೇಕು?

ಒಂದು ಸಲ ಆಸ್ಥಾನದ ತುಂಬು ಸಭೆಯಲ್ಲಿ ಅಕ್ಬರನು ಬೀರಬಲನೊಡನೆ, "ಎಲೈ ಬೀರಬಲನೆ! ಮೂರ್ಖನು ಗಂಟುಬಿದ್ದರೆ ಅತನೊಡನೆ ಹೇಗೆ ವರ್ತಿಸಬೇಕು?" ಎಂದು ಕೇಳಿದನು. ಬೀರಬಲನು ಮರುದಿನ ಅದರ ಉತ್ತರವನ್ನು ಕೊಡುವೆನೆಂದು ಹೇಳಿ, ಹೊರಟುಹೋದನು. ಮನೆ ಸೇರಿ, ಹತ್ತಿರದ ಒಬ್ಬ ಜಮೀನುದಾರನನ್ನು ಕರೆಸಿ, "ನಾಳೆ ನೀನು ನನ್ನೊಂದಿಗೆ ಆಸ್ಥಾನಕ್ಕೆ ಬರಬೇಕು. ನನ್ನೊಡನೆ ಬಾದಶಹನು ಯಾವುದಾದರೂ ಪ್ರಶ್ನೆಕೇಳಿದರೆ ನಾನು ನಿನ್ನ ಕಡೆ ಕೈತೋರಿಸಿ, ಈತನು ನನ್ನ ಸಹೋದರನೆಂದೂ ಬಹಳ ಬುದ್ಧಿವಂತನೆಂದೂ ತಮ್ಮ ಪ್ರಶ್ನೆಗೆ ಸಮರ್ಪಕವಾದ ಉತ್ತರ

ವನ್ನು ಇವನೇ ಕೊಡುವನೆಂದೂ ಹೇಳುವೆನು. ನಿನ್ನೊಡನೆ ಏನಾದರೂ ಕೇಳಿದಾಗ, ನೀನು ಸುಮ್ಮನಿರಬೇಕು. ಎಷ್ಟೇ ಒತ್ತಾಯಪಡಿಸಿದರೂ ಉತ್ತರವೀಯದೆ ಮೌನವಾಗಿರಬೇಕು. ಬಳಿಕ ನಿನ್ನ ಮೌನದ ಕಾರಣ ವನ್ನು ತಿಳಿಸಿ, ನಿನಗೆ ಬಹುಮಾನಕೊಡಿಸುವೆನು" ಎಂದು ಹೇಳಿದನು.

ಮರುದಿನ ಬೀರಬಲನನ್ನು ನೋಡಿದಾಕ್ಷಣ, "ನಿನ್ನೆಯ ಪ್ರಶ್ನೆಗೆ ಉತ್ತರವೆಲ್ಲಿ?" ಎಂದು ಅಕ್ಬರನು ಪ್ರಶ್ನಿಸಿದನು. ಬೀರಬಲನು, "ಮಹಾ ಪ್ರಭು! ತಮ್ಮ ಪ್ರಶ್ನೆಗೆ ಸರಿಯಾದ ಉತ್ತರವನ್ನು ನನ್ನ ಈ ಬುದ್ಧಿವಂತ ಸಹೋದರನು ಕೊಡುವನು" ಎಂದು ಹೇಳಿ, ಅವನನ್ನು ಮುಂದೆ ತಂದು ನಿಲ್ಲಿಸಿದನು. ಈ 'ಸಹೋದರ'ನನ್ನು ನೋಡಿ, "ಅಯೋಗ್ಯನು ಗಂಟು ಬಿದ್ದರೆ ಆತನೊಡನೆ ಹೇಗೆ ವರ್ತಿಸಬೇಕು?" ಎಂದು ಕೇಳಿದನು. ಜಮೀನು ದಾರನು ಅದಕ್ಕೆ ಉತ್ತರವೀಯಲಿಲ್ಲ; ಮೌನವಾಗಿದ್ದನು. ಬಾದಶಹನು ಹಲವಾರು ಸಲ ಕೇಳಿದರೂ ಅವನು ಉತ್ತರವೀಯದಿರುವುದನ್ನು ನೋಡಿ, ಕೊನೆಗೆ ಬೇಸರಗೊಂಡು, "ನಿನ್ನ ಸಹೋದರನು ಯಾವ ಉತ್ತರವನ್ನೂ ಕೊಡದೆ ಸುಮ್ಮನಿದ್ದಾನೆ" ಎಂದಾಗ ಬೀರಬಲನು, "ಮಹಾಸ್ವಾಮಿ! ಆತನು ಉತ್ತರವೀಯುತ್ತಲೇ ಇದ್ದಾನೆ. ಅಂದರೆ ಅಯೋಗ್ಯನು ಗಂಟು ಬಿದ್ದರೆ ಆತನೊಡನೆ ಮಾತನಾಡದೆ ಮೌನವಾಗಿರಬೇಕು ಎಂದರ್ಥ" ಎಂದನು.

ಇದನ್ನು ಕೇಳಿ ಬಾದಶಹನು, ಬೀರಬಲನು ತನ್ನನ್ನು ಅಯೋಗ್ಯರ ಸಾಲಿಗೆ ಸೇರಿಸಿದನೆಂದು ತಿಳಿದು, ಅತ್ಯಂತ ಲಜ್ಜಿತನಾದನು.

## ೧೭. ಬ್ರಾಹ್ಮಣನಿಗೆ ಪ್ರಾಣದಂಡ!

ಒಂದು ದಿನ ಅಕ್ಬರನು ಒಬ್ಬ ಬ್ರಾಹ್ಮಣನ ಮೇಲೆ ಸಿಟ್ಟುಗೊಂಡು ಅವನಿಗೆ ಮರಣದಂಡನೆಯನ್ನು ವಿಧಿಸಿದನು. ಅಷ್ಟರಲ್ಲಿ ಬೀರಬಲನು ಬಂದನು. ಅವನು ಆ ಬ್ರಾಹ್ಮಣನನ್ನು ರಕ್ಷಿಸುವನೆಂದು ಭಾವಿಸಿದ ಬಾದ ಶಹನು ಅದಕ್ಕೆಡೆಕೊಡಬಾರದೆಂದು, "ಬೀರಬಲ! ಈತನ ವಿಚಾರದಲ್ಲಿ ಮಾತೆತ್ತದಿರು. ಈ ದಿನ ಇವನನ್ನು ಗಲ್ಲಿಗೇರಿಸುವುದು ನಿಶ್ಚಯ! ನೀನೇ ನಾದರೂ ಹೇಳಿದರೆ ಅದಕ್ಕೆ ವಿರುದ್ಧವಾಗಿಯೇ ವರ್ತಿಸುವೆನು. ಇದು

ದೃಢ ನಿಶ್ಚಯ" ಎಂದನು. ಅದನ್ನು ಕೇಳಿ ಬೀರಬಲನು, "ಮಹಾಪ್ರಭು! ಇವನಿಗೆ ನಿಶ್ಚಯವಾಗಿಯೂ ಘಾಶಿಶಿಕ್ಷೆ ಕೊಡಲೇಬೇಕು" ಎಂದನು.

ಇದನ್ನು ಕೇಳಿದ ಅಕ್ಬರನು, ತನ್ನ ಮಾತಿನ ಮೇರೆಗೆ ಆತನನ್ನು ಬಿಟ್ಟುಬಿಡಬೇಕಾಯಿತು.

## ೧೭. ನಕ್ಷತ್ರಗಳೆಷ್ಟು?

ಒಂದು ದಿನ ಅಕ್ಬರನು ಆಸ್ಥಾನದಲ್ಲಿ, "ಬೀರಬಲ, ನಿನ್ನನ್ನು ಎಲ್ಲರೂ ಬಹಳ ಬುದ್ಧಿವಂತನೆಂದು ಹೇಳುತ್ತಾರೆ. ಈ ತನಕ ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆಯೆಂದು ಯಾರೂ ಎಣಿಸಿದವರಿಲ್ಲ. ಆಕಾಶದಲ್ಲೆಷ್ಟು ನಕ್ಷತ್ರ ಗಳಿವೆ ಹೇಳು" ಎಂದನು. ಇದನ್ನು ಕೇಳಿದ ಬೀರಬಲನು, "ಮಹಾಪ್ರಭು! ಈಗ ಹೇಗೆ ಹೇಳಲಿ? ಎಣಿಸಲು ಒಂದು ತಿಂಗಳ ಕಾಲಾವಕಾಶ ಕೊಡಿರಿ" ಎನ್ನಲು ಅಕ್ಬರನು ಅದಕ್ಕೊಪ್ಪಿದನು.

ಒಂದು ತಿಂಗಳ ಕಾಲ ಕಳೆಯುತ್ತಾ ಬಂದರೂ ಯಾವ ಉತ್ತರ ಕೊಡುವುದೆಂದು ಬೀರಬಲನಿಗೆ ಹೊಳೆಯಲಿಲ್ಲ. ಒಂದೇ ಒಂದು ದಿನ ಬಾಕಿ ಉಳಿಯಲು ಅಕ್ಬರನು, "ಉತ್ತರವೆಲ್ಲಿ?" ಎಂದಾಗ, "ಪ್ರಭು, ನಾಳೆ ತರುವೆನು" ಎಂದನು.

ಮರುದಿನ ಆಸ್ಥಾನಕ್ಕೆ ಬರುವಾಗ ತನ್ನೊಂದಿಗೆ ಮರಳು ತುಂಬಿದ ಒಂದು ಗಾಡಿಯನ್ನು ಹೊಡೆಸಿಕೊಂಡು ಬಂದನು. ಬೀರಬಲನನ್ನು ನೋಡಿ ದೊಡನೆಯೇ ಅಕ್ಬರನು, "ಉತ್ತರವೆಲ್ಲಿ?" ಎಂದನು. "ಮಹಾಪ್ರಭು! ಅಲ್ಲಿ ತಂದಿಟ್ಟಿರುವೆನು. ದಯಮಾಡಿಸಬೇಕು" ಎಂದು ಅಕ್ಬರನನ್ನು ಗಾಡಿಯ ಬಳಿಗೆ ಕರೆದುಕೊಂಡು ಹೋಗಿ, "ಈ ಗಾಡಿಯಲ್ಲಿ ಎಷ್ಟು ಮರ ಳಿನ ಕಣಗಳಿವೆಯೋ ಅಷ್ಟೇ ನಕ್ಷತ್ರಗಳು ಆಕಾಶದಲ್ಲಿವೆ. ಎಣಿಸಿ ನೋ ಡಿರಿ" ಎಂದನು.

ಅಕ್ಬರನು "ಇವುಗಳನ್ನೆಣಿಸಲು ಯಾರಿಂದ ಸಾಧ್ಯ?" ಎಂದಾಗ, "ಪ್ರಭು! ಮರಳಿನ ಕಣಗಳನ್ನೇ ಎಣಿಸಲಸಾಧ್ಯವಾದಾಗ ನಕ್ಷತ್ರಗಳನ್ನಾ ದರೂ ಹೇಗೆ ಎಣಿಸಬಹುದು" ಎಂದನು. ಈ ಉತ್ತರದಿಂದ ಅಕ್ಬರನು ಸಂತೋಷಗೊಂಡು, ಬೀರಬಲನಿಗೆ ಬಹುಮಾನವಿತ್ತನು.

[ಆಧಾರದಿಂದ]



# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1961ನೇ ಫೆಬ್ರವರಿ ತಿಂಗಳ ಮೂರನೆಯ ವಾರದ ವರೆಗೆ 304 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

304 ಅಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 6250 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

Edited, Printed & Published by K. V. Shenoy
at The Prabhat Printers, Ltd., Mangalore.